## ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ರಘುನಾಥರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು)

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : **651**

ಉತ್ತರಿಸಬೇಕಾದ ದಿನಾಂಕ : **22-07-2019**

ಉತ್ತರಿಸುವ ಸಚಿವರು : ಪಶುಸಂಗೋಪನೆ ಹಾಗೂ ಮೀನುಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿರುವ ಒಟ್ಟು ಗೋಶಾಲೆಗಳು ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) ಪ್ರತಿ ಗೋಶಾಲೆಗಳಲ್ಲಿರುವ ಜಾನುವಾರುಗಳ ಸಂಖ್ಯೆ ಎಷ್ಟು; (ಹಣ ಬಿಡುಗಡೆಯಾದ ಸ್ಪಷ್ಟ ವಿವರ ನೀಡುವುದು) | ಬೀದರ ಜಿಲ್ಲೆಯಲ್ಲಿ ಪ್ರಸಕ್ತ ಸಾಲಿನಲ್ಲಿ ಸರ್ಕಾರದ ವತಿಯಿಂದ ಗೋಶಾಲೆಗಳನ್ನು ತೆರೆದಿರುವುದಿಲ್ಲ. |
| ಆ | ಗೋಶಾಲೆ ಮತ್ತು ಗ್ರಾಮೀಣ ಭಾಗದಲ್ಲಿರುವ ಜಾನುವಾರುಗಳಿಗೆ ಮೇವು ಮತ್ತು ನೀರು ಒದಗಿಸಲು ಕೈಗೊಂಡ ಕ್ರಮಗಳೇನು; | ಬೀದರ ಜಿಲ್ಲೆಯಲ್ಲಿ ಓಂಗಾರು ಹಂಗಾಮಿನಲ್ಲಿ ಇಪ್ಪತ್ತೊಂದು ಸಾವಿರ ಹೆಕ್ಟೇರ್‌ನಲ್ಲಿ ಬಿಳಿ ಜೋಳದ ಬೆಳೆ ಉತ್ತಮವಾಗಿ ಬಂದಿದ್ದು, 1.05ಲಕ್ಷ ಟನ್ ಮೇವು (ಬಿಳಿಜೋಳದ ದಂಟು) ಸಂಗ್ರಹಣೆ ಮಾಡಿಕೊಂಡಿರುತ್ತಾರೆ. ನೀರಾವರಿ ಸೌಕರ್ಯಗಳಿರುವ ರೈತರಿಗೆ ಮೇವು ಬೆಳೆಯಲು ಇಲಾಖೆಯಿಂದ 49220 ಮೇವಿನ ಬೀಜದ ಮಿನಿಕಿಟ್‌ಗಳನ್ನು ಉಚಿತವಾಗಿ ವಿತರಿಸಲಾಗಿದೆ. ಜಿಲ್ಲೆಯಲ್ಲಿ 15 ಮೇವು ನಿಧಿ ಕೇಂದ್ರಗಳನ್ನು ತೆರೆದು ಇಲ್ಲಿಯವರೆಗೆ 842 ಮೆಟ್ರಿಕ್ ಟನ್ ಮೇವು ಖರೀದಿಸಿ ಪ್ರತಿ ಕೆ.ಜಿ.ಗೆ ರೂ. 2/- ರಂತೆ ರಿಯಾಯಿತಿ ದರದಲ್ಲಿ 5037 ರೈತರಿಗೆ ವಿತರಿಸಲಾಗಿದೆ. ಜಾನುವಾರುಗಳಿಗೆ ನೀರನ್ನು ಪೂರೈಸುವ ಹೊಣೆ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗೆ ಬರುತ್ತದೆ. |
| ಇ | ಹಾಗಿದ್ದಲ್ಲಿ, ಪ್ರತಿ ಗೋಶಾಲೆಗಳಲ್ಲಿನ ಜಾನುವಾರುಗಳಿಗೆ ಪ್ರತಿನಿತ್ಯ ಎಷ್ಟು ಪ್ರಮಾಣದ ಮೇವು ಒದಗಿಸಲಾಗುತ್ತಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |
| ಈ | ಬೀದರ್ ಜಿಲ್ಲೆಯಲ್ಲಿ ಅಧಿಕೃತ ಮತ್ತು ಅನಧಿಕೃತ ಎಷ್ಟು ಕಸಾಯಿಖಾನೆಗಳಿವೆ; ಅನಧಿಕೃತ ಕಸಾಯಿಖಾನೆಗಳನ್ನು ತಡೆಗಟ್ಟಲು ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು) | ಬೀದರ ಜಿಲ್ಲೆಯಲ್ಲಿ ಎರಡು ಅಧಿಕೃತ ಕಸಾಯಿಖಾನೆಗಳಿದ್ದು, ಕಸಾಯಿಖಾನೆಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆ ಪೌರಾಡಳಿತ/ ನಗರಾಭಿವೃದ್ಧಿ ಇಲಾಖೆಯ ಅಧೀನದಲ್ಲಿ ಬರುತ್ತದೆ. |

ಪಸಂಮೀ 21 ಸಲೆವಿ 2019

(ವೆಂಕಟರಾವ್ ನಾಡಗೌಡ)
ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು